ಪುಟ್ಟ ಮಕ್ಕಳಿಗೆ ಪ್ರಕೃತಿಯ ಕಥೆಗಳು

# ಒಳ್ಳೆಯ ಕೆಲಸ

ವಿದ್ಯಾ ಮತ್ತು ರಾಜಾರಾಮ್ ಶರ್ಮ
ಅನುವಾದ: ಶಾಂತಾ ಸುಬ್ಬ ರಾವ್



ಈ ಕಥೆ ದಕ್ಷಿಣ ದೆಹಲಿಯ ರಿಡ್ಜ್ ಅರಣ್ಯ ಪ್ರದೇಶದಲ್ಲಿರುವ ಸಂಜಯ ವನದಲ್ಲಿ 2010 ರ ಜುಲೈ ತಿಂಗಳಲ್ಲಿ ಹಾಗು ಸಮೀಪದ ಒಂದು ಸಂಸ್ಥೆಯ ಆವರಣದಲ್ಲಿ 2017 ರ ಏಪ್ರಿಲ್–ಮೇ ತಿಂಗಳಲ್ಲಿ ಮಾಡಿದ ಅವಲೋಕನೆಗಳನ್ನು ಆಧರಿಸಿದೆ.

ಈ ಪುಸ್ತಕದಲ್ಲಿ ಇರುವ ಚಿತ್ರಗಳು, ಪಕ್ಷಿಯ ಅಥವ ಗೂಡುಗಳ ನಿಜವಾದ ಗಾತ್ರವನ್ನು ತೋರಿಸದೇ ಇರಬಹುದು.



"ಏನಾದರು ಮಾಡು. ಬೇಗ... ಏನಾದರೂ," ಎಂದು ಒತ್ತಾಯಿಸಿತು, ಸಿಂಪಿಗ ಪಕ್ಷಿ.

ನಾನು ತಬ್ಬಿಬಾಗಿ ನೋಡಿದೆ, ಅಷ್ಟೆ.

"ಬೇಗ! ಬೇಗ ... ತೋಟಗಾರ ಬಂದು ಬಿಡುತ್ತಾನೆ ... ಗಿಡಗಳಿಗೆ ನೀರು ಹಾಕಲು!" ಬಕುಲ ಮರದ ಮೇಲೆ ಕುಳಿತ ಆ ಸಿಂಪಿಗ ತುಂಬ ಆತಂಕದಿಂದ ಒತ್ತಾಯಿಸಿತು.





ನನಗೂ ಅದರಷ್ಟೇ ಆತಂಕವಾಗಿತ್ತು. ಬೆರಗಾಗಿ ನಡುಗುತ್ತಾ, ಏನೂ ತೋರದೇ, ಅಲ್ಲಿ ಇಲ್ಲಿ ನೋಡಿದೆ.

"ಬೇಗ! ಬೇಗ!" ಮತ್ತೊಮ್ಮೆ ಎಚ್ಚರಿಸಿತು, ಸಿಂಪಿಗ.

ಪಕ್ಕದ ದೊಡ್ಡ ವೃತ್ತಾಕಾರದ ಪಾತಿಯಲಿದ್ದ ನಾಗದಾಮಿನಿ ಗಿಡಗಳ ಮಧ್ಯೆ ಹೇಗೋ ಒಂದು ಹಿಪ್ಪುನೇರಳೆ ಸಸಿ ಬೇರೂರಿತ್ತು. ಅದರ ಎರಡು ಎಲೆಗಳನ್ನು ಜೊತೆಗೆ ಸೇರಿಸಿ ಹೊಲೆದಮೇಲೆ, ಮಧ್ಯದಲ್ಲಿ ನಾರು, ಹತ್ತಿ ಮತ್ತು ಇತರ ಮೃದುವಾದ ವಸ್ತುಗಳಿಂದ ಮಾಡಿದ ಒಂದು ಪುಟ್ಟ ಬಟ್ಟಲಾಕಾರದ ಗೂಡಿತ್ತು. ಒಂದು ಎಲೆಯ ತೊಟ್ಟು ಮುರಿದು, ಗೂಡಿನ ಭಾರವನ್ನು ಇನೊಂದು ತಡೆಯದೇ ಇದ್ದುದರಿಂದ, ಇಡೀ ಗೂಡೇ ಕಳಚಿ

ನೆಲಕ್ಕೆ ಬಿದ್ದಿತ್ತು – ನಾಲ್ಕು ಮರಿಗಳ ಸಮೇತ!

ಆ ಮರಿಗಳನ್ನು ಕಾಪಾಡಲು ಸಿಂಪಿಗ ಪಕ್ಷಿ ನನ್ನನ್ನು ಒತ್ತಾಯಿಸುತ್ತಿತ್ತು.

ಕೆಳಗೆ ಬಿದ್ದಿದ್ದರೂ ಗೂಡು ಹಾಗೂ ಮರಿಗಳು ಭದ್ರವಾಗಿದ್ದುವು.

ನಾನೇನಾದರೂ ಮಾಡಲು ಹೋಗಿ ಅವುಗಳಿಗೇನಾದರೂ ತೊಂದರೆ ಆದರೆ ಏನು ಮಾಡುವುದು? ನನಗೆ ಚಿಂತೆಯಾಗಿತ್ತು.

ನಾನು ಅನುಮಾನಿಸುತ್ತಾ ನಿಂತಿರುವಾಗ, "ಸಮಯವಿಲ್ಲ! ಬೇಗ ... ಬೇಗ ಏನಾದರೂ ಮಾಡು!" ಸಿಂಪಿಗ ಸಿಟ್ಟಿನಿಂದ ಕೂಗಿಕೊಂಡಿತು.





ಬಹಳ ಎಚ್ಚರದಿಂದ ಗೂಡನ್ನು ಎತ್ತಿದೆ. ಕೈ ನಡುಗಿತು. ಈಗೇನು ಮಾಡಲಿ? ಮನೆಗೆ ತೆಗೆದುಕೊಂಡು ಹೋದೆ ಎಂದಾದರೆ ಅವಕ್ಕೆ ಏನು ತಿನ್ನಿಸಲಿ?

ಸಿಂಪಿಗ ಪಕ್ಷಿಯ ಆತಂಕ ಇನ್ನಷ್ಟು ಹೆಚ್ಚಿತು. "ಅದನ್ನು ಕಟ್ಟು" ಎಂದು ಆದೇಶಿಸಿತು.

"ಯಾತರಿಂದ? ಗೂಡನ್ನು ಇನ್ನಷ್ಟು ಹಾಳುಮಾಡಿಬಿಟ್ಟರೇ?" ಹೆದರಿಕೆ ಆಯಿತು. ನನಗೇನು ಹೊಳೆಯಲಿಲ್ಲ.

"ಯಾತರಿಂದಾದರೂ, ಯಾತರಿಂದಾದರೂ..." ಸಿಂಪಿಗ ಹೇಳಿತು, ಅಸಮಾದಾನದಿಂದ.

ಆ ಗೂಡನ್ನು ಜೋಪಾನವಾಗಿ ಎಡಗೈಗೆ ಬದಲಾಯಿಸಿಕೊಂಡು ಪಾತಿಯಲ್ಲಿದ್ದ ಹುಲ್ಲನ್ನು ಕಿತ್ತೆ.  ಸರಿ ಇದ್ದ ಎಲೆತೊಟ್ಟನ್ನು ಹುಲ್ಲಿನಿಂದ ಗಿಡಕ್ಕೆ ಭದ್ರವಾಗಿ ಕಟ್ಟಿದೆ. ನಂತರ ನಾಗದಾಮಿನಿಯ ಒಣಗಿದ ಎಲೆ ಕಿತ್ತು ಗೂಡಿನ ಸುತ್ತಲೂ ಬೇಗನೆ ಸುತ್ತಿದೆ. ಆದರೂ ಸುರಕ್ಷಿತವಾಗೇನೂ ಕಾಣಿಸಲಿಲ್ಲ. ಬೇಗ ಮನೆಗೆ ಓಡಿ ಹೋಗಿ ಸ್ವಲ್ಪ ದಾರವನ್ನು ತೆಗೆದುಕೊಂಡು ಹಿಂತಿರುಗಿ ಬಂದೆ. ಗೂಡು ಹಾಗೆಯೇ ಇದ್ದುದನ್ನು ನೋಡಿ ಸಮಾಧಾನವಾಯಿತು. ಸಾಕಷ್ಟು ದಾರ ಉಪಯೋಗಿಸಿ ಗೂಡನ್ನು ಹಾಗು ಕಟ್ಟಿದ ಎಲೆ ತೊಟ್ಟನ್ನು ಸರಿಯಾಗಿ ಭದ್ರ ಮಾಡಿದೆ.

ಸಂತೋಷವಾಯಿತು... ನೆಮ್ಮದಿಯ ಉಸಿರು ಬಿಟ್ಟೆ. ಹಿಂತಿರುಗಿ ನೋಡಿದೆ. ಸಿಂಪಿಗ ಕಾಣಿಸಲಿಲ್ಲ. ಕಾದೆ. ಮತ್ತಷ್ಟು ಕಾದೆ. ಸಿಂಪಿಗ ನಾಪತ್ತೆ!





ಮರಿಗಳನ್ನು ನೋಡಲು ಹತ್ತಿರ ಹೋದೆ.

ಗೊತ್ತಾಗದೆ ಗಿಡವನ್ನು ಅಲ್ಲಾಡಿಸಿದೆ. ತಕ್ಷಣವೇ ನಾಲ್ಕು ಮರಿಗಳೂ ಬಾಯಿ ತೆರೆದುವು. ವಿಶಾಲವಾಗಿ, ಗುಟುಕನ್ನು ನಿರೀಕ್ಷಿಸುತ್ತಾ.

ಅಯ್ಯೋ! ಎಷ್ಟು ಹಸಿವಿನಿಂದ ಬಳಲಿದ ಮರಿಗಳೋ ಇವು? ಪುನಃ ಆತಂಕವಾಯಿತು. ಮರಿಗಳನ್ನು ನೋಡುತ್ತಾ ನಿಂತೆ. ಗಿಡವೋ ಗೂಡೋ ಸ್ವಲ್ಪ ಅಲ್ಲಾಡಿದರೂ ದೊಡ್ಡದಾಗಿ ಬಾಯಿಬಿಡುತ್ತಿದ್ದುವು ಅವು.

ಸಿಂಪಿಗ ಅಲ್ಲೆ ಎಲ್ಲೋ ಇರಬಹುದೆಂದು ಸುತ್ತಲೂ ನೋಡಿದೆ. ಏನನ್ನೂ ಅಲ್ಲಾಡಿಸದೇ ಗಮನವಿಟ್ಟು ನಿಧಾನವಾಗಿ ಹಿಂದೆ ಜರುಗಿದೆ.

ಪುನಃ ಹುಡುಕಿದೆ.

ಅದೃಷ್ಟವಶಾತ್ ಕಾಣಿಸಿಬಿಡ್ತು ಸಿಂಪಿಗ... ಸ್ವಲ್ಪ ದೂರದಲ್ಲಿ ಇದ್ದ ಗೇಟಿನ ಮೇಲೆ. ಕೊಕ್ಕು ಭರ್ತಿ ಆಹಾರವಿತ್ತು. ಅಬ್ಬಾ! ಮರಿಗಳಿಗೆ ಬಂತು ಊಟ!

ಆದರೆ ... ಆಶ್ಚರ್ಯ!

ಸಿಂಪಿಗ ವಿರುದ್ಧ ದಿಕ್ಕಲ್ಲಿ ಛಕ್ಕನೆ ಹಾರಿಹೋಯಿತು!

ಗಿಡದ ಕೆಳಭಾಗದ ಕಾಂಡವೊಂದನ್ನು ಗಟ್ಟಿಯಾಗಿ ಹಿಡಿದು ಕುಳಿತ ಒಂದು ಮರಿಯ ಹತ್ತಿರ.





ಆ ಮರಿಗೆ ಗುಟಕು ಕೊಟ್ಟಿತು ಸಿಂಪಿಗ! ಕೂಡಲೆ ಹಾರಿ ಹೋಯಿತು.

ತಳಮಳಿಸಿ ಕೂಗಿದೆ, "ಈ ಮರಿಗಳೂ ಬಹಳ ಹಸಿದಿವೆ!"

"ಎಲ್ಲಾ ಆಗಿದ್ದು ನಿನ್ನಿಂದಲೇ", ಎಲ್ಲಿತ್ತೋ ಅಲ್ಲಿಂದಲೇ ಸಿಡುಕಿತು ಆ ಸಿಂಪಿಗ.

ಹಾಗೆಂದರೇನು? ನಾನು ಹೇಗೆ ತಾನೆ ಹೊಣೆಯಾಗುವೆ?

ಸಿಂಪಿಗ ಹೇಳಿದ್ದನ್ನು ಲೆಕ್ಕಿಸದೇ ಗೂಡಲ್ಲಿದ್ದ ಮರಿಗಳನ್ನೂ ದೂರದಲ್ಲಿದ್ದ ಆ ಮರಿಯನ್ನು ಇನ್ನೊಮ್ಮೆ ಮತ್ತೊಮ್ಮೆ ನೋಡಿದೆ.

ಹಿಂದೊಮ್ಮೆ ನಾನು ನೋಡಿದ್ದ ಕೆಮ್ಮೀಸೆ ಪಿಕಳಾರರ ಮರಿಗಳು ನೆನಪಿಗೆ ಬಂದುವು.

ಮೊಟ್ಟೆ ಒಡೆದು ಹೊರಬಂದಾಗ ಪುಕ್ಕಗಳೇ ಇರಲಿಲ್ಲ.

ಎರಡು ಮೂರು ದಿನಗಳಲ್ಲಿ ತಲೆ, ದೇಹ ಹಾಗು ರೆಕ್ಕೆಗಳ ಮೇಲೆ ಸಣ್ಣ ಸಣ್ಣ ಕಡ್ಡಿ ಆಕಾರದ ಕಪ್ಪು ಗರಿಗಳು ಬೆಳೆದುವು. ಸಾಲು ಸಾಲುಗಳಲ್ಲಿ. ಜೋಡಿಸಿದಂತೆ.

ಇವು ಉದ್ದ ಉದ್ದವಾಗಿ ಬೆಳೆದು, ಸುಮಾರು ಒಂದು ವಾರದಲ್ಲಿ ಕಡ್ಡಿಗಳಂತೆ ಇದ್ದ ಗರಿಗಳು ತೆರೆದು ನವುರಾದ ಪುಕ್ಕಗಳಾದವು.





ತೆರೆದನಂತರ, ತಲೆಮೇಲಿನ ಪುಕ್ಕಗಳು ಕಪ್ಪಾದುವು ಹಾಗೂ ದೇಹದ ಮೇಲ್ಭಾಗ ಕಂದು ಬಣ್ಣದ್ದಾದುವು.

ಈ ಗೂಡಲ್ಲಿದ್ದ ಮರಿಗಳ ಗರಿಗಳು ಇನ್ನೂ ತೆರೆದಿರಲಿಲ್ಲ. ಯಾವ ಬಣ್ಣದ ಪುಕ್ಕಗಳಾಗುತ್ತವೋ ಗೊತ್ತಿರಲಿಲ್ಲ. ಆದರೆ ಸಿಂಪಿಗ ಗುಟುಕು ಕೊಟ್ಟ ಮರಿಯ ಗರಿಗಳು ತೆರೆದಿದ್ದುವು.

ಹಾಗಾದರೆ ಇದು ಸಿಂಪಿಗ ಪಕ್ಷಿಯ ಗೂಡೇ ಅಲ್ಲವೇನೋ? ಗೊಂದಲದಲ್ಲಿ ಸಿಕ್ಕಿಕೊಂಡೆ ನಾನು. ಈ ಮರಿಗಳು ಯಾವ ಹಕ್ಕಿಯದು?

"ಎಲೆಗಳನ್ನು ಹೊಲಿದು ಗೂಡು ಮಾಡುವ ಹಕ್ಕಿಗಳೆಲ್ಲಾ ಸಿಂಪಿಗಗಳಲ್ಲ!"

ನನ್ನ ಗಮನಕ್ಕೆ ಬರದೇ, ಆ ಸಿಂಪಿಗ ಪಕ್ಷಿ ಯಾವಾಗಲೋ ಸದ್ದಿಲ್ಲದೆ ಬಂದು ಪಕ್ಕದ ಬೊಗನ್ವಿಲಿಯ ಬಳ್ಳಿಯ ಮೇಲೆ ಕುಳಿತು ಇದ್ದಕ್ಕಿದ್ದಂತೆ ಹೇಳಿತು.

"ಹೌದೂ ... ಹಾಗಾದರೆ .... ಈ ಮರಿಗಳು ಯಾರು?" ನನ್ನ ಗೊಂದಲ ಇನ್ನೂ ಪರಿಹಾರವಾಗಿರಲಿಲ್ಲ.

"ಸ್ವಲ್ಪ ತಾಳು, ನೀನೇ ನೋಡುವಿಯಂತೆ. ಹಿಂದಕ್ಕೆ ಬಾ, ಗೂಡಿನ ಸಮೀಪದಲ್ಲಿ ನೀನಿದ್ದರೆ ತಂದೆ ತಾಯಿ ಪಕ್ಷಿಗಳು ಹೇಗೆ ತಾನೆ ಹತ್ತಿರ ಬಂದಾವು?"

ಹಾಗೆಯೇ ಮಾಡಿದೆ. ಹಿಂದೆ ಹೋಗಿ ಬಾಗೆ ಮರಕ್ಕೆ ಒರಗಿ ನಿಂತೆ.



ಅಲ್ಲಿಂದಲೂ ಗೂಡು ಸರಿಯಾಗಿ ಕಾಣಿಸುತಿತ್ತು.

ಬಹಳ ಸಮಯ ಕಾಯಬೇಕಾಗಲಿಲ್ಲ. ಹಾರಿ ಬಂತು ಉದ್ದ ಬಾಲದ ಪಕ್ಷಿ. ಅದರ ತಲೆ ಮತ್ತು ರೆಕ್ಕೆ ಕಡು ಬೂದಿ ಬಣ್ಣದ್ದು.

"ಸುವ್ವಿ ಪಕ್ಷಿ!" ನಾನು ಕೂಗಿದೆ ಖುಷಿಯಾಗಿ. ಆಮಲ್ತಾಸಿನ ಮರಕ್ಕೆ ಹಾರಿ ಬಂದು, ಕೊಂಬೆ ಇಂದ ಕೊಂಬೆಗೆ ಕೆಳಗಡೆ ಕೆಳಗಡೆ ಜಿಗಿದು ಗೂಡಿಗೆ ಬಂದು, ಒಂದು ಕ್ಷಣ ಕಾದು, ಸರ್ರನೆ ಮರಿಯೊಂದಕ್ಕೆ ಗುಟುಕು ನೀಡಿ ಭರ್ರನೆ ಹಾರಿಹೋಯಿತು ಆ ಸುವ್ವಿ ಪಕ್ಷಿ.

"ಓ! ಈಗ ಎಲ್ಲಾ ತಿಳಿಯಿತು" ಎಂದೆ ತೃಪ್ತನಾಗಿ.

"ಸರಿಯೇ ... ಈಗ ಗೊತ್ತಾಯಿತಲ್ಲಾ ... ಮರಿಗಳು ಯಾರೆಂದು."

"ಅಯ್ಯೋ! ಅಷ್ಟೇ ಅಲ್ಲಾ, ಗೂಡು ಏಕೆ ಬಿದ್ದು ಹೋಯಿತೆಂದೂ ಗೊತ್ತಾಯಿತು ಈಗ," ಹೇಳಿದೆ ಗಾಢ ಭರವಸೆಯಿಂದ.

"ನಿನಗೆ ಗೊತ್ತೇ? ನಿಜವಾಗಿಯೂ?" ತಬ್ಬಿಬ್ಬಾಗಿ ಕೇಳಿತು ಸಿಂಪಿಗ.

ಬೇರೆ ದಾರಿ ಇಲ್ಲದೆ, ವಿವರಿಸಬೇಕಾಯಿತು. ಸಿಂಪಿಗ ಅದನ್ನು ತಾಳ್ಮೆ ಇಂದ ಕೇಳಿತು.

ನಮ್ಮ ಹಿತ್ತಲಲ್ಲಿ ಬಹಳಷ್ಟು ಗಿಡಗಳಿವೆ. ಸುವ್ವಿ ಪಕ್ಷಿಗಳೆರಡು ಪ್ರತಿ





ಸಾಯಂಕಾಲ ಬಂದು ಗಿಡದ ಮೇಲೋ ತಂತಿಯ ಮೇಲೋ ಕೂತು ರಾತ್ರಿಯೆಲ್ಲ ಕಳೆಯುತ್ತಿದ್ದುವು. ಏಪ್ರಿಲ್ ಬಂತು. ಗೂಡು ಕಟ್ಟಲು ಗಿಡಗಳ ನಡುವೆ ಸರಿಯಾದ ಜಾಗವನ್ನು ಹುಡುಕಲು ಆರಂಭಿಸಿದುವು. ಪ್ರತಿ ದಿನ ಬಂದು, ಎಲ್ಲೆಲ್ಲಿ ಗೂಡು ಕಟ್ಟಬಹುದೋ ಅಲ್ಲಲ್ಲಿ ಎಲೆಗಳಿಂದ ತೂಗಾಡಿ, ಅವುಗಳನ್ನು ಎಳೆದಾಡಿ, ಮಡಿಸಿ ನೋಡಿ, ತೂತುಗಳನ್ನು ಮಾಡಿ, ಬಹಳಷ್ಟು ಚರ್ಚಿಸಿ, ಜಗಳವಾಡಿರಲೂ ಬಹುದು; ಇಷ್ಟೆಲ್ಲಾ ಮಾಡಿ ಹಾರಿಹೋಗುವುವು.

ಹೀಗೆ ಒಂದು ವಾರ ವಿಚಾರ ಮಾಡಿದನಂತರ ಒಂದು ಹೀರೆಕಾಯಿ ಬಳ್ಳಿಯನ್ನು ಆರಿಸಿ ಅದರಲ್ಲಿ ಗೂಡು ಮಾಡುವ ಪ್ರಯತ್ನ ಸಡಗರದಿಂದ ಸಾಗಿತು.

ಎರಡು ಎಲೆಗಳನ್ನು ಎಳೆದು ಹಿಡಿದು ಅವುಗಳನ್ನು ಹತ್ತಿಯಿಂದಲೋ ಜೇಡದ ಬಲೆಯಿಂದಲೋ ಹೊಲಿದು ಸೇರಿಸಿತು ಸುವ್ವಿ. ಆದರೆ ಆ ದಿನದ ಪರಿಶ್ರಮವೆಲ್ಲ ವ್ಯರ್ಥವಾಯಿತು. ಎಲೆಗಳು ಸೇರಲಿಲ್ಲ. ಮರು ದಿನ ಮತ್ತೆ ಪ್ರಯತ್ನಿಸಿ ಸಫಲತೆ ಗಳಿಸಿ, ಇನ್ನು ಮೂರು ದಿನಗಳಲ್ಲಿ ಸಾಕಷ್ಟು ಮುಂದುವರಿಸಿತು ಗೂಡು ಕಟ್ಟುವುದನ್ನು.

ನಾಲ್ಕನೇ ದಿನ – ಯೋಜನೆ ಬದಲಾಯಿತು. ಝೂಕಿನಿ ಗಿಡದ ಎಲೆಗಳ ಮೇಲೆ ಬಿತ್ತು ಕಣ್ಣು. ಪುನಃ ಎಳೆದಾಟ, ಪುನಃ ಚರ್ಚೆ, ಪುನಃ ಭಿನ್ನಾಭಿಪ್ರಾಯ; ಝೂಕಿನಿ ಎಲೆಗಳೋ ಹೀರೆಕಾಯಿ ಎಲೆಗಳೋ? ಪ್ರತಿ ದಿನ ಬಂದು ಹಿಂದಿನಂತೆಯೇ ಎಲೆಗಳನೆಲ್ಲಾ ಪರೀಕ್ಷಿಸಿ, ಮಾತುಕಥೆಗಳೆಲ್ಲಾ ನಡೆಸಿ ಹಾರಿಹೋಗುತ್ತಿದ್ದವು – ಮನಸು ಮಾಡದೆ.





ಇಡಿ ವಾರ ಹೀಗೇ ಕಳೆಯಿತು. ಈ ಸಂಭ್ರಮದಲ್ಲಿ ಎಲೇಗಳೆಲ್ಲ ತೂತಾದವು. ಹರಿದು ಹೋದವು.

ಮೇ ತಿಂಗಳ ಮಧ್ಯದಲ್ಲಿ – ಗೂಡು ಕಟುವ ಯೋಜನೆ ಹಾಕಿ ಸರಿಯಾಗಿ ಒಂದು ತಿಂಗಳ ನಂತರ – ನಿರ್ಧಾರಕ್ಕೆ ಬಂದುವು. ಹೀರೆಕಾಯಿ ಬಳ್ಳಿಯನ್ನೇ ಆರಿಸಿಕೊಂಡವು. ಇನ್ನು ಯಾವ ಸಂದೇಹವೂ ಇರಲಿಲ್ಲ.

ತಡ ಮಾಡದೆ ಬೇಗಬೇಗನೆ ಸಾಗಿತು ಗೂಡು ಕಟ್ಟುವ ಕೆಲಸ. ಒಂದು ಎಲೆಯನ್ನು ಮಡಿಸಿ ಹೊಲಿದು ಕೊಳವೆಯಂತೆ ಮಾಡಿ, ಅದರ ಕೆಳಭಾಗವನ್ನು ಮತ್ತೊಂದು ಎಲೆಗೆ ಸಿಕ್ಕಿಸಿ ಭದ್ರಮಾಡಿತು ಸುಪ್ವಿ. ಅನಂತರ ಮೆತ್ತಗಿರೊ ವಸ್ತುಗಳನ್ನೆಲ್ಲಾ  ಕೊಳವೆಯಲ್ಲಿ ತುರುಕಿ ಚೊಕ್ಕವಾದ

ಮೃದುವಾದ ಬಟ್ಟಲಾಕಾರದ ಗೂಡನ್ನು ರಚಿಸಿದುವು.

"ಇವಾಗ ನೀನೇ ಹೇಳು ... ಯಾವ ಎಲೆ ತಾನೇ ಇಷ್ಟೊಂದು ಎಳೆತ ಇಷ್ಟೊಂದು ತಿವಿತವನ್ನು ತಡೆದುಕೊಳ್ಳಬಹುದು? ಅದೂ ಇಷ್ಟು ದಿನಗಳವರೆಗೂ?" ಸಿಂಪಿಗನನ್ನು ಕೇಳಿದೆ ನಾನು.

"ಓ! ಎರಡು ಗೂಡು ... ಎರಡೇ ಎರಡು ಗೂಡುಗಳನ್ನು ನೋಡಿ ತೀರ್ಮಾನಕ್ಕೆ ಬಂದುಬಿಟ್ಟಿದಿಯಲ್ಲಾ? ಸುವ್ವಿ ಪಕ್ಷಿಗಳ ಗೂಡುಗಳೆಲ್ಲಾ ಉಪಯೋಗಕ್ಕೆ ಬಾರವು ಎಂದು!" ಸ್ಪಷ್ಟವಾದ ತಿರಸ್ಕಾರದಿಂದ ಕೇಳಿತು.

ಸಿಂಪಿಗ ಪಕ್ಷಿಯ ಪ್ರಶ್ನೆ ಕೇಳಿ ಪೆಚ್ಚಾದೆ.





ನಿಜ, ನಾನು ನೋಡಿದ ಎರಡೂ ಗೂಡುಗಳು ಕಳಪೆಯಾಗಿದ್ದುವು. ಒಂದು ಮುರಿದು ಕೆಳಗೆ ಬಿದ್ದಿತ್ತು. ಇನ್ನೊಂದು ಇನ್ನೂ ಬಿದ್ದಿರಲಿಲ್ಲ. ಆದರೆ ಸುವ್ವಿ ಪಕ್ಷಿ ತೀರ ಸಾಮಾನ್ಯವಾದ ಪಕ್ಷಿ. ಸುತ್ತಮುತ್ತಲಲ್ಲಿ ಬೇಕಾದಷ್ಟು ಇವೆ.

“ಹಾಗಾದರೇ ...?” ನನ್ನ ಮೂರ್ಖತನವನ್ನು ಅರಿತು ಅಲ್ಲೇ ನಿಂತೆ.

ತಾಯಿ ಸುವ್ವಿ ಮತ್ತು ತಂದೆ ಸುವ್ವಿ ಪಕ್ಷಿಗಳು ಒಂದಾದಮೇಲೆ ಒಂದು ಬಂದು ಮರಿಗಳಿಗೆ ಗುಟಕು ಕೊಡುತ್ತಿದ್ದನ್ನು ನೋಡುತ್ತಾ ನಿಂತೆ. ಚಿಟ್ಟೆ, ಕ್ರಿಮಿಕೀಟಗಳು, ಹುಳಗಳು ... ಎಲ್ಲಾ ತಂದು ತಂದು ತಿನ್ನಿಸುತಿದ್ದವು; ಅವಸರ ಅವಸರವಾಗಿ. ಸರಿಪಡಿಸಿದ ಗೂಡನ್ನು ನೋಡಿಯೂ ಯಾವ ಪ್ರತಿಕ್ರಿಯೆಯೂ ತೋರಿಸದೆ.

"ನೋಡವುಗಳನ್ನು! ಗೂಡು ಸರಿಮಾಡಿ ಕೊಟ್ಟಿದ್ದಕ್ಕೆ ಯಾವ ಕೃತಜ್ಞತೆಯ ಮಾತೂ ಇಲ್ಲವಲ್ಲಾ?" ಆಶ್ಚರ್ಯಗೊಂಡು ಕೇಳಿದೆ.

ದಿಟ್ಟಿಸಿ ನೋಡಿತು ನನ್ನನ್ನು ಆ ಸಿಂಪಿಗ. "ಉಪಕಾರ ಮಾಡಿದೆ. ಒಳ್ಳೆಯ ಕೆಲಸ ಮಾಡಿದೆ. ನಿನಗೆ ಇದು ಗೊತ್ತು ಅಲ್ಲವೇ? ಮತ್ತೇಕೆ ಬೇಕು ನಿನಗೆ ಕೃತಜ್ಞತೆಯ ಮಾತುಗಳು?"

***





ಸುವ್ವಿ ಪಕ್ಷಿ



ಚಚೇ



ಗೂಡು ಮಾಡುವ ಪ್ರಯತ್ನ



ಮುಂದುವರಿದ ಪ್ರಯತ್ನ



ಝೂಕಿನಿ ಗಿಡದ ಎಲೆಗಳ ಮೇಲೆ ಪ್ರಯತ್ನ



ಸಿಂಪಿಗ ಹಾಗು ಅದರ ಮರಿ

